## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 122 |
| ಸದಸ್ಯರ ಹೆಸರು | : ಶ್ರೀ ಎಂ ನಾರಾಯಣಸ್ವಾಮಿ |
| ಉತ್ತರಿಸುವ ಸಚಿವರು | : ತೋಟಗಾರಿಕೆ ಸಚಿವರು |
| ಉತ್ತರಿಸಬೇಕಾದ ದಿನಾಂಕ | : 15.07.2019 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನ ಮುಖ್ಯ ಉದ್ಯಾನವನಗಳಲ್ಲೊಂದಾದ ಕಬ್ಬನ್ ಪಾರ್ಕಿನಲ್ಲಿ ವಾಯುವಿಹಾರಕ್ಕೆಂದು ಬರುವ ಸಾರ್ವಜನಿಕರು ಹಾಗೂ ಹಿರಿಯನಾಗರೀಕರಿಗೆ ಶೌಚಾಲಯ ಇಲ್ಲದಿರುವುದರಿಂದ ಜನರು ಎಲ್ಲೆಂದರಲ್ಲಿ ಮೂತ್ರ ವಿಸರ್ಜನೆ ಮಾಡುತ್ತಿರುವುದರಿಂದ ಪರಿಸರದ ಸ್ವಚ್ಛತೆ ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರಿನ ಮುಖ್ಯ ಉದ್ಯಾನವನಗಳಲ್ಲೊಂದಾದ ಕಬ್ಬನ್ ಪಾರ್ಕಿನಲ್ಲಿ ವಾಯುವಿಹಾರಕ್ಕೆಂದು ಬರುವ ಸಾರ್ವಜನಿಕರು ಹಾಗೂ ಹಿರಿಯ ನಾಗರೀಕರ ಸೌಕರ್ಯಕ್ಕಾಗಿ ಮತ್ತು ಪರಿಸರದ ಸ್ವಚ್ಛತೆಯನ್ನು ಕಾಪಾಡುವ ಹಿತದೃಷ್ಟಿಯಿಂದ 5 ಶೌಚಾಲಯಗಳನ್ನು ಉದ್ಯಾನವನದ ಆಯ್ದ ಪ್ರಮುಖ ಪ್ರದೇಶಗಳಲ್ಲಿ ನಿರ್ಮಿಸಲಾಗಿದೆ.<br>ಜನರು ಎಲ್ಲೆಂದರಲ್ಲಿ ಮೂತ್ರ ವಿಸರ್ಜನೆ ಮಾಡುತ್ತಿರುವುದರಿಂದ ಪರಿಸರದ ಸ್ವಚ್ಛತೆ ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br>ಉದ್ಯಾನವನಕ್ಕೆ ಭೇಟಿ ನೀಡುವವರಿಗೆ ಅನುವಾಗುವಂತೆ ಶೌಚಾಲಯ ಇರುವ ಸ್ಥಳದೆಡೆಗೆ ಆಯ್ದ ಪ್ರದೇಶದಲ್ಲಿ ಬೋರ್ಡ್ ಗಳನ್ನು ಹಾಕಲಾಗಿದೆ, ಪರಿಸರದ ಸ್ವಚ್ಚತೆಯನ್ನು ಕಾಪಾಡುವ ಹಿತದೃಷ್ಟಿಯಿಂದ ಆಯ್ದ ಪ್ರದೇಶಗಳಲ್ಲಿ ಮೂತ್ರ ವಿಸರ್ಜನೆ ಮಾಡದಂತೆ ಸೂಚನಾ ಫಲಕಗಳನ್ನು ಹಾಕಲಾಗಿದೆ ಮತ್ತು ಈ ಬಗ್ಗೆ ಗಮನಿಸಲು ಭದ್ರತಾ ಸಿಬ್ಬಂದಿಗಳಿಗೂ ಸೂಚನೆ ನೀಡಲಾಗಿದೆ. |
| ಆ | ಈ ಉದ್ಯಾನವನಕ್ಕೆ ಬರುವ ಸಾರ್ವಜನಿಕರು ಇಲ್ಲಿನ ಸರ್ಕಾರಿ ಕೇಂದ್ರ ಗ್ರಂಥಾಲಯದಲ್ಲಿನ ಶೌಚಾಲಯವನ್ನು ಅವಲಂಬಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಬ್ಬನ್ ಪಾರ್ಕಿನಲ್ಲಿ ವಾಯುವಿಹಾರಕ್ಕೆಂದು ಬರುವ ಸಾರ್ವಜನಿಕರು ಹಾಗೂ ಹಿರಿಯ ನಾಗರೀಕರು ಅವರಿಗಾಗಿ ನಿರ್ಮಿಸಿರುವ 5 ಶೌಚಾಲಯಗಳನ್ನು ಬಳಸುತ್ತಿದ್ದಾರೆ. ಸರ್ಕಾರಿ ಕೇಂದ್ರ ಗ್ರಂಥಾಲಯದಲ್ಲಿನ ಶೌಚಾಲಯವನ್ನು ಅವಲಂಬಿಸುವ ಅವಶ್ಯಕತೆಯಿರುವುದಿಲ್ಲ. ಆದರೆ, ಸರ್ಕಾರಿ ಕೇಂದ್ರ ಗ್ರಂಥಾಲಯಕ್ಕೆ ಭೇಟಿ ನೀಡುವ ಓದುಗರು ಗ್ರಂಥಾಲಯದಲ್ಲಿನ ಶೌಚಾಲಯವನ್ನು ಬಳಸುತ್ತಿದ್ದಾರೆ. |

| | | |
|---|---|---|
|  | ಕಬ್ಬನ್ ಪಾರ್ಕಿನಲ್ಲಿ ಶೌಚಾಲಯವನ್ನು ನಿರ್ಮಿಸಲು ಇಲಾಖೆಯು ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಕಬ್ಬನ್ ಪಾರ್ಕಿನಲ್ಲಿ ಶೌಚಾಲಯಗಳನ್ನು ನಿರ್ಮಿಸಲು ಇಲಾಖೆ ಕೈಗೊಂಡಿರುವ ಕ್ರಮಗಳು ಕೆಳಕಂಡಂತಿವೆ.<br>• ಕಬ್ಬನ್ ಉದ್ಯಾನವನದ ಹಡ್ಸನ್ ಸರ್ಕಲ್ ನ ಬಳಿ – 1 ಶೌಚಾಲಯವನ್ನು Build, Operate ಮತ್ತು Transfer (BOT) ಆಧಾರದ ಮೇಲೆ ಮತ್ತು ಹೈಕೋರ್ಟ್ ಹಿಂಭಾಗದ ಆವರಣದಲ್ಲಿ – 1 ಶೌಚಾಲಯವನ್ನು ನಿರ್ಮಾಣ ಮಾಡಲಾಗಿದೆ.<br>• ಕಬ್ಬನ್ ಉದ್ಯಾನವನದ ಕೆ. ಆರ್. ವೃತ್ತದ ಮೀನುಗಾರಿಕೆ ಉಪಹಾರ ವೃತ್ತದ ಬಳಿ 1, ಯು.ಬಿ ಸಿಟಿ ವೃತ್ತದ ಬಳಿ 1 ಮತ್ತು ಬಾಲ ಭವನದ ಮುಂಭಾಗದ ಆವರಣದಲ್ಲಿ 1 ಶೌಚಾಲಯವನ್ನು ಸನ್ಮಾನ್ಯ ಲೋಕ ಸಭಾ ಸದಸ್ಯರು, ಬೆಂಗಳೂರು ಕೇಂದ್ರ ವಿಭಾಗ ರವರ ಅನುದಾನದಲ್ಲಿ ಏಪ್ರಿಲ್ ಮಾಹೆಯಲ್ಲಿ ನಿರ್ಮಾಣ ಮಾಡಿ ಪ್ರವಾಸಿಗರು/ಸಾರ್ವಜನಿಕರಿಗೆ ಅನುವು ಮಾಡಿಕೊಡಲಾಗಿದೆ ಹಾಗೂ ನಿರ್ವಹಣೆ ಮಾಡಲಾಗುತ್ತಿದೆ.<br>• ಮೆ.ಫ್ಲಾಕ್ ಇಂಡಿಯಾ ಸಂಸ್ಥೆಯು ಸಾಂಸ್ಥಿಕ ಸಾಮಾಜಿಕ ಜವಾಬ್ದಾರಿಯಡಿ ಜೈವಿಕ ರಾಸಾಯನಿಕ ಶೌಚಾಲಯಗಳನ್ನು ಅಳಡಿಸಲು ಮುಂದೆ ಬಂದಿದ್ದು, ಅವಶ್ಯವಿರುವ ಪ್ರದೇಶದಲ್ಲಿ ಜೈವಿಕ ರಾಸಾಯನಿಕ ಶೌಚಾಲಯಗಳನ್ನು ಅಳವಡಿಸಲು ಸದರಿ ಸಂಸ್ಥೆಗೆ ಅನುಮತಿ ನೀಡಲಾಗಿದೆ. ಕಬ್ಬನ್ ಉದ್ಯಾನವನದ ಸ್ವಚ್ಛತೆಯನ್ನು ಕಾಪಾಡುವ ದಿಸೆಯಲ್ಲಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

ನಂ: HORTI/66/HGM/2019-admn-Horti-Sec

(ಎಂ.ಸಿ.ಮನಗೂಳಿ)

ತೋಟಗಾರಿಕೆ ಸಚಿವರು

ಎಂ.ಸಿ. ಮನಗೂಳಿ

ತೋಟಗಾರಿಕೆ ಸಚಿವರು

LCSt.Qn NO 22+124

ಅನುಬಂಧ - 6

ಸಾಲ ಮನ್ನಾ ಘೋಷಣೆಯ ನಂತರ ವರದಿಯಾದ ರೈತರ ಆತ್ಮಹತ್ಯೆ ಪ್ರಕರಣಗಳ ವಿವರ

| ಕ್ರ.ಸಂ. | ಜಿಲ್ಲೆಗಳು | ವರದಿಯಾದ ಪ್ರಕರಣಗಳು | ತಿರಸ್ಕೃತ ಪ್ರಕರಣಗಳು | ಅರ್ಹ ಪ್ರಕರಣಗಳು | ಪರಿಹಾರ ನೀಡಿದ ಪ್ರಕರಣಗಳು | ಬಾಕಿ ಇರುವ ಪ್ರಕರಣಗಳು | ಎಫ್.ಎಸ್.ಎಲ್. ವರದಿಗಾಗಿ ಬಾಕಿ ಇರುವ ಪ್ರಕರಣಗಳು | ಇತರೆ ದಾಖಲಾತಿಗಳಿಗಾಗಿ ಬಾಕಿ ಇರುವ ಪ್ರಕರಣಗಳು |
|---|---|---|---|---|---|---|---|---|
| 1 | ಬಾಗಲಕೋಟೆ | 22 | 4 | 16 | 16 | 2 | 0 | 2 |
| 2 | ಬಳ್ಳಾರಿ | 18 | 3 | 15 | 14 | 0 | 0 | 0 |
| 3 | ಬೆಂ. ಗ್ರಾಮಾಂತರ | 4 | 1 | 3 | 3 | 0 | 0 | 0 |
| 4 | ಬೆಂ. ನಗರ | 0 | 0 | 0 | 0 | 0 | 0 | 0 |
| 5 | ಬೆಳಗಾವಿ | 86 | 18 | 62 | 62 | 6 | 3 | 3 |
| 6 | ಬೀದರ್ | 33 | 4 | 28 | 24 | 1 | 0 | 1 |
| 7 | ಚಾಮರಾಜನಗರ | 4 | 0 | 4 | 4 | 0 | 0 | 0 |
| 8 | ಚಿಕ್ಕಬಳ್ಳಾಪುರ | 2 | 0 | 2 | 2 | 0 | 0 | 0 |
| 9 | ಚಿಕ್ಕಮಗಳೂರು | 21 | 7 | 14 | 14 | 0 | 0 | 0 |
| 10 | ಚಿತ್ರದುರ್ಗ | 34 | 9 | 24 | 22 | 1 | 0 | 1 |
| 11 | ದ.ಕನ್ನಡ | 4 | 1 | 2 | 2 | 1 | 0 | 1 |
| 12 | ದಾವಣಗೆರೆ | 44 | 10 | 27 | 27 | 7 | 0 | 7 |
| 13 | ಧಾರವಾಡ | 33 | 10 | 23 | 20 | 0 | 0 | 0 |
| 14 | ಗದಗ | 16 | 6 | 10 | 10 | 0 | 0 | 0 |
| 15 | ಹಾಸನ | 28 | 14 | 13 | 13 | 1 | 0 | 1 |
| 16 | ಹಾವೇರಿ | 38 | 3 | 33 | 33 | 2 | 0 | 2 |
| 17 | ಕಲಬುರಗಿ | 50 | 4 | 37 | 32 | 9 | 0 | 9 |
| 18 | ಕೊಡಗು | 8 | 0 | 8 | 4 | 0 | 0 | 0 |
| 19 | ಕೋಲಾರ | 3 | 0 | 2 | 2 | 1 | 1 | 0 |
| 20 | ಕೊಪ್ಪಳ | 32 | 4 | 24 | 18 | 4 | 1 | 3 |
| 21 | ಮಂಡ್ಯ | 42 | 8 | 33 | 33 | 1 | 0 | 1 |
| 22 | ಮೈಸೂರು | 62 | 10 | 49 | 45 | 3 | 0 | 3 |
| 23 | ರಾಯಚೂರು | 23 | 7 | 16 | 14 | 0 | 0 | 0 |
| 24 | ರಾಮನಗರ | 14 | 2 | 12 | 12 | 0 | 0 | 0 |
| 25 | ಶಿವಮೊಗ್ಗ | 28 | 6 | 20 | 16 | 2 | 1 | 1 |
| 26 | ತುಮಕೂರು | 35 | 6 | 24 | 24 | 5 | 1 | 4 |
| 27 | ಉಡುಪಿ | 1 | 0 | 1 | 1 | 0 | 0 | 0 |
| 28 | ಉ.ಕನ್ನಡ | 6 | 3 | 3 | 2 | 0 | 0 | 0 |
| 29 | ವಿಜಯಪುರ | 21 | 2 | 16 | 16 | 3 | 0 | 3 |
| 30 | ಯಾದಗಿರಿ | 46 | 9 | 31 | 29 | 6 | 2 | 4 |
| | ಒಟ್ಟು | 758 | 151 | 552 | 514 | 55 | 9 | 46 |

ಅಪರ ಕೃಷಿ ನಿರ್ದೇಶಕರು
(ಬೆಳೆ ಅಭಿವೃದ್ಧಿ ಮತ್ತು ಯೋಜನೆ)